

# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 26-03-2021 ಪ್ರಶ್ನೆ ಸಂಖ್ಯೆ : 309(2253)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ನಿರಾಣಿ ಹಣಮಂತ್ ರುದ್ರಪ್ಪ(ಪದವೀಧರರ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 26-03-2021

ಉತ್ತರಿಸುವ ಸಚಿವರು: ಕೃಷಿ ಸಚಿವರು

ವಿಷಯ : ಧಾರವಾಡ ಕೃಷಿ ವಿಶ್ವವಿದ್ಯಾಲಯದಲ್ಲಿ ಖಾಲಿಯಿರುವ ಬೋಧಕ/ಬೋಧಕೇತರ ಹುದ್ದೆಗಳ ನೇಮಕಾತಿ ಕುರಿತು

(ಅ) ಧಾರವಾಡದಲ್ಲಿರುವ ಕೃಷಿ ವಿಶ್ವವಿದ್ಯಾಲಯದಲ್ಲಿ ಮತ್ತು ಅದರ ಅಧೀನದಲ್ಲಿರುವ ಮಹಾವಿದ್ಯಾಲಯಗಳಲ್ಲಿ ಮಂಜೂರಾದ ಮತ್ತು ಖಾಲಿ ಇರುವ ಒಟ್ಟು ಬೋಧಕ ಮತ್ತು ಬೋಧಕೇತರ ಹುದ್ದೆಗಳೆಷ್ಟು; (ಹುದ್ದೆವಾರು, ಕಾಲೇಜುವಾರು ವಿವರ ನೀಡುವುದು)

(ಆ) ಅವುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಖಾಯಂ, ಗುತ್ತಿಗೆ ಮತ್ತು ದಿನಗೂಲಿ ನೌಕರರ ಸಂಖ್ಯೆ ಎಷ್ಟು; (ಹುದ್ದೆವಾರು ವಿವರ ನೀಡುವುದು)

(ಇ) ಖಾಲಿಯಿರುವ ಹುದ್ದೆಗಳನ್ನು ಯಾವ ಕಾಲಮಿತಿಯಲ್ಲಿ ಭರ್ತಿ ಮಾಡಲಾಗುವುದು;

(ಈ) ಸದರಿ ವಿಶ್ವವಿದ್ಯಾಲಯದ ಅಭಿವೃದ್ಧಿಗೆ ಪ್ರಸಕ್ತ ಸಾಲಿನಲ್ಲಿ ಒದಗಿಸಲಾದ ಅನುದಾನವೆಷ್ಟು;

(ಉ) ಸದರಿ ಅನುದಾನದಲ್ಲಿ ಯಾವ-ಯಾವ ಅಭಿವೃದ್ಧಿ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ ಮತ್ತು ಆ ಯೋಜನೆಗಳನ್ನು ಯಾವ ಕಾಲಮಿತಿಯಲ್ಲಿ ಪೂರ್ಣಗೊಳಿಸಲಾಗುವುದು?